## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 474
2. ಸದಸ್ಯರ ಹೆಸರು : ಹೆಚ್.ಎಂ. ರಮೇಶ ಗೌಡ
3. ಉತ್ತರಿಸುವ ದಿನಾಂಕ: : 24-09-2020
4. ಉತ್ತರಿಸುವವರು : ಮುಖ್ಯಮಂತ್ರಿಯವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಿಬಿಎಂಪಿ ದಾನಪತ್ರ, ಕ್ರಯಪತ್ರ ಮತ್ತು ವಿಭಾಗ ಪತ್ರಗಳ ಅನ್ವಯ ಆಸ್ತಿ ವಿಭಜನೆ ಕಾನೂನುಬಾಹಿರ ಎಂದು 20 ಅಕ್ಟೋಬರ್ 2014 ರಲ್ಲಿ ಸುತ್ತೋಲೆ ಹೊರಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಸುತ್ತೋಲೆಯ ಕುರಿತು ಸರ್ಕಾರದ ಸ್ಪಷ್ಟ ನಿಲುವೇನು; | ಬಂದಿದೆ.<br>ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 452 ಎಂಎನ್‌ಯು 2009, ದಿನಾಂಕ: 03-02-2010ರಲ್ಲಿ ಕರ್ನಾಟಕ ಪೌರ ನಿಗಮ(ಸುಧಾರಣಾ ವೆಚ್ಚಗಳ ವಸೂಲಿ) ನಿಯಮಗಳು-2009ನ್ನು ರಚಿಸಿದ್ದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಸುತ್ತೋಲೆ ಸಂಖ್ಯೆ:ಉಆ(ಕಂ)ಪಿಆರ್/4214-2014-15, ದಿನಾಂಕ: 20-10-2014ರಲ್ಲಿ ಭೂ ಪರಿವರ್ತನೆಗೊಂಡ ಏಕ ನಿವೇಶನಗಳಿಗೆ ಮಾತ್ರ ಸಧಾರಣಾ ವೆಚ್ಚವನ್ನು ಪಾವತಿಸಿಕೊಂಡು ಖಾತಾ ನೊಂದಾಯಿಸಲು ಆದೇಶಿಸಲಾಗಿದೆ. ಭೂ ಪರಿವರ್ತನೆಗೊಂಡ ಸ್ವತ್ತುಗಳಿಗೆ ಸಕ್ಷಮ ಪ್ರಾಧಿಕಾರದಿಂದ ವಿಭಜನೆ ಮಾಡಲು ಅನುಮತಿಯನ್ನು ಪಡೆಯದೆ ದಾನ ಪತ್ರ, ವಿಭಾಗ ಪತ್ರ ಹಾಗೂ ಕ್ರಯಪತ್ರಗಳ ಆಧಾರದ ಮೇಲೆ ಖಾತಾ ವಿಭಜನೆ ಮಾಡುವುದು ಕಾನೂನು ಬಾಹಿರವೆಂದು ತಿಳಿಸಲಾಗಿದೆ. |
| ಆ) | ಕೇವಲ ಆಸ್ತಿ ತೆರಿಗೆ ಶುಲ್ಕ ಮಾತ್ರ ವಸೂಲಿ ಮಾಡುವ ಮಹಾನಗರ ಪಾಲಿಕೆ ಆಸ್ತಿ ವಿಭಜನೆಯ ಕುರಿತು ಯಾವ ನಿಯಮಾವಳಿ ಅನ್ವಯ ಈ ಸುತ್ತೋಲೆ ಹೊರಡಿಸಿದೆ; | ಸದರಿ ಸುತ್ತೋಲೆಯನ್ನು ಕೆ.ಎಂ.ಸಿ ಕಾಯ್ದೆ 1976ರ ಕಲಂ 466 (ಬಿ) ಹಾಗೂ ಅದರಡಿಯಲ್ಲಿ ರಚಿಸಲಾಗಿರುವ ನಿಯಮಾವಳಿಗಳ ಅನ್ವಯ ಹೊರಡಿಸಲಾಗಿರುತ್ತದೆ. |
| ಇ) | ಬಿಬಿಎಂಪಿ ಸುತ್ತೋಲೆಯ ಪ್ರಕಾರ ಖಾತೆ ನೊಂದಾವಣೆ ವಿಭಜನೆಗಳು ಯಾವ ಆಸ್ತಿಗೆ ಅನ್ವಯಿಸುತ್ತವೆ; ಪಾಲಿಕೆಯ ಸುತ್ತೋಲೆಯಿಂದ ಪಿತ್ರಾರ್ಜಿತ ಆಸ್ತಿ ಹಂಚಿಕೆಯಲ್ಲಿ ಜನ ಸಾಮಾನ್ಯರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರವು ಆದೇಶ ಸಂಖ್ಯೆ: ನಅಇ 452 ಎಂಎನ್‌ಯು 2009, ದಿನಾಂಕ: 03-02-2010ರಲ್ಲಿ ಉಲ್ಲೇಖಿಸಲಾಗಿರುವ ಎಲ್ಲಾ ಸ್ವತ್ತುಗಳಿಗೆ ಅನ್ವಯವಾಗುತ್ತದೆ. ಮುಂದುವರೆದಂತೆ, ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಸಲ್ಲಿಸಿದ್ದಲ್ಲಿ ವಿಭಜಿತ ವಿಸ್ತೀರ್ಣಕ್ಕೆ ನಗರ ಪಾಲಿಕೆಯಲ್ಲಿ ಖಾತೆ ನೊಂದಾಯಿಸಲಾಗುವುದು. |
| ಈ) | 'ಎ' ಖಾತಾ ಮತ್ತು 'ಬಿ' ಖಾತಾ ನಡುವಿನ ವ್ಯತ್ಯಾಸಗಳೇನು; 'ಬಿ' ಖಾತಾ ಹೆಸರಿನಲ್ಲಿ ದಂದೆ ನಡೆಯುತ್ತಿರುವುದು ಮತ್ತು ಜನರನ್ನು ಬಿಬಿಎಂಪಿ ಖಾತೆಯ ಹೆಸರಲ್ಲಿ ಶೋಷಣೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರದ ಕೈಗೊಂಡ ಕ್ರಮಗಳೇನು? | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕ್ರಮಬದ್ಧವಾಗಿರುವ ಸ್ವತ್ತುಗಳ ವಿವರಗಳನ್ನು 'ಎ' ವಹಿಯಲ್ಲಿ ಹಾಗೂ ಕ್ರಮಬದ್ಧವಾಗಿಲ್ಲದೇ ಇರುವ ಸ್ವತ್ತುಗಳ ವಿವರಗಳನ್ನು 'ಬಿ' ವಹಿಯಲ್ಲಿ ದಾಖಲಿಸಿಕೊಳ್ಳಲು ಕಾಯ್ದೆಯಲ್ಲಿ ಅವಕಾಶ ಕಲ್ಪಿಸಲಾಗಿರುತ್ತದೆ. 'ಬಿ' ವಹಿಯಲ್ಲಿ ಸ್ವತ್ತುಗಳ ವಿವರಗಳನ್ನು ನೊಂದಾಯಿಸಿಕೊಳ್ಳುವಲ್ಲಿ ತೆರಿಗೆದಾರರು / ಸಾರ್ವಜನಿಕರಿಗೆ ಯಾವುದೇ ಶೋಷಣೆ ಮಾಡುತ್ತಿರುವುದಿಲ್ಲ. |

**ಸಂಖ್ಯೆ : ನಅಇ 21 ಬಿಬಿಎಲ್ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ.